# ಕರ್ನಾಟಕ ವಿಧಾನ ಪರಿಷತ್ತು.

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1018
2. ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 21.09.2021
4. ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮೈಸೂರು ಸಕ್ಕರೆ ಕಂಪನಿಯು ಯಾವ ವರ್ಷದಿಂದ ಕಬ್ಬು ಅರೆಯುವುದನ್ನು ಸ್ಥಗಿತಗೊಳಿಸಿದೆ; | ಮೈಸೂರು ಸಕ್ಕರೆ ಕಾರ್ಖಾನೆಯಲ್ಲಿ ಮೊದಲಿಗೆ 2015-16 ಮತ್ತು 2016-17ನೇ ಹಂಗಾಮಿನಲ್ಲಿ ಕಬ್ಬು ಅರೆಯುವ ಕಾರ್ಯವನ್ನು ಸ್ಥಗಿತಗೊಳಿಸಲಾಗಿತ್ತು. 2017-18 ಮತ್ತು 2018-19ನೇ ಸಾಲಿನಲ್ಲಿ ಕಬ್ಬು ಅರೆಯುವ ಕಾರ್ಯವನ್ನು ನಿರ್ವಹಿಸಲಾಗಿದೆ. ಮುಂದುವರಿದು, ದುಡಿಯುವ ಬಂಡವಾಳದ ಕೊರತೆಯಿಂದಾಗಿ 2019-20ನೇ ಹಂಗಾಮಿನಿಂದ ಕಬ್ಬು ಅರೆಯುವ ಕಾರ್ಯವನ್ನು ಸ್ಥಗಿತಗೊಳಿಸಲಾಗಿದೆ |
| (ಆ) | ಈ ಕಾರ್ಖಾನೆ ಸ್ಥಗಿತಗೊಂಡಿರುವುದರಿಂದ ಮಂಡ್ಯ ಜಿಲ್ಲೆಯ ಕಬ್ಬು ಬೆಳೆಗಾರರಿಗೆ ಸಂಕಷ್ಟ ಎದುರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಮೈಸೂರು ಸಕ್ಕರೆ ಕಾರ್ಖಾನೆಯಲ್ಲಿ ಕಬ್ಬು ನುರಿಸುವಿಕೆಯನ್ನು ಸ್ಥಗಿತಗೊಳಿಸಿದ್ದ ಹಂಗಾಮುಗಳಲ್ಲಿ ರೈತರ ಹಿತಾಸಕ್ತಿಯನ್ನು ಕಾಪಾಡುವ ದೃಷ್ಟಿಯಿಂದ ಈ ಕಾರ್ಖಾನೆಯ ಕಬ್ಬು ಮೀಸಲು ಕ್ಷೇತ್ರದಲ್ಲಿ ಬೆಳೆದ ಕಬ್ಬನ್ನು ನೆರೆಯ ಸಕ್ಕರೆ ಕಾರ್ಖಾನೆಗಳಿಗೆ ಮತ್ತು ನೆರೆ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಲಾಗಿದೆ. |
| (ಇ) | ಬಂದಿದ್ದಲ್ಲಿ, ಈ ಕಾರ್ಖಾನೆಯನ್ನು ಯಾವಾಗ ಆರಂಭಿಸಲಾಗುವುದು; ಹಾಗೂ ಸರ್ಕಾರಿ ಸ್ವಾಮ್ಯದಲ್ಲಿ ಈ ಕಾರ್ಖಾನೆಯನ್ನು ಮುಂದುವರಿಸಲು ಸರ್ಕಾರ ಆಲೋಚಿಸಿದೆಯೇ; (ವಿವರ ನೀಡುವುದು) | ಮೈಸೂರು ಸಕ್ಕರೆ ಕಂಪನಿಯು 2005ರಲ್ಲಿ ಬಿ.ಐ.ಎಫ್.ಆರ್.ನಿಂದ ರೋಗಗ್ರಸ್ಥ ಕಾರ್ಖಾನೆಯೆಂದು ಘೋಷಿಸಲ್ಪಟ್ಟಿರುತ್ತದೆ. ಸದರಿ ಕಾರ್ಖಾನೆಯು 2013-14ರ ಅಂತ್ಯಕ್ಕೆ ರೂ.463.39 ಕೋಟಿಗಳಷ್ಟು ಕ್ರೋಢೀಕೃತ ನಷ್ಟವನ್ನು ಅನುಭವಿಸಿದ್ದ ಕಾರಣದಿಂದಾಗಿ, 2015-16, 2016-17 ಮತ್ತು 2019-20ನೇ ಹಂಗಾಮಿನಿಂದ ದುಡಿಯುವ ಬಂಡವಾಳದ ಕೊರತೆಯುಂಟಾಗಿ, ಕಬ್ಬು ನುರಿಸುವ ಕಾರ್ಯವನ್ನು ಸ್ಥಗಿತಗೊಳಿಸಿರುತ್ತದೆ. ಅಲ್ಲದೇ, ಪ್ರಸ್ತುತ ಮೈಸೂರು ಸಕ್ಕರೆ ಕಂಪನಿಯು ಒಟ್ಟು ರೂ.136.01 ಕೋಟಿಗಳಷ್ಟು ಸಾಲ ಮತ್ತು ಜವಾಬ್ದಾರಿಗಳನ್ನು ಹೊಂದಿರುತ್ತದೆ.<br>ಮೈಸೂರು ಸಕ್ಕರೆ ಕಾರ್ಖಾನೆಯನ್ನು LROT(Lease Rehabilitate Operate Transfer) ಆಧಾರದ ಮೇಲೆ 2021-22ನೇ ಹಂಗಾಮಿನಿಂದ 40 ವರ್ಷಗಳ ಅವಧಿಗೆ ಖಾಸಗಿಯವರಿಗೆ ಗುತ್ತಿಗೆ ನೀಡಲು ಸರ್ಕಾರದ ಆದೇಶ ಸಂಖ್ಯೆ: ಸಿಐ 05 ಸಿಓಎಫ್ 2020, ದಿನಾಂಕ:18.11.2020ರಲ್ಲಿ ಸರ್ಕಾರದ ಅನುಮತಿ ನೀಡಲಾಗಿರುತ್ತದೆ ಮತ್ತು ಟೆಂಡರ್ ಪ್ರಕ್ರಿಯೆಯಲ್ಲಿ ಯಶಸ್ವಿಯಾಗುವ ಗುತ್ತಿಗೆದಾರರು 2021-22ನೇ ಹಂಗಾಮಿನಿಂದ ಕಬ್ಬು ನುರಿಸುವ ಕಾರ್ಯವನ್ನು ಪ್ರಾರಂಭಿಸತಕ್ಕದೆಂದು ಷರತ್ತು ವಿಧಿಸಲು ನಿರ್ಧರಿಸಲಾಗಿತ್ತು.<br>ಆದರೆ, ಮೈಸೂರು ಸಕ್ಕರೆ ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆ ಆಧಾರದ ಮೇರೆಗೆ ನೀಡುವ ಪ್ರಸ್ತಾವನೆಗೆ ಕಾರ್ಖಾನೆಯ ವ್ಯಾಪ್ತಿಯಲ್ಲಿ ಕಬ್ಬು ಬೆಳೆಯುವ ರೈತರು, ಕಂಪನಿಯ ಷೇರುದಾರರು, ಜನಪ್ರತಿನಿಧಿಗಳು ಮತ್ತು ಸಾರ್ವಜನಿಕರು ವಿರೋಧ ವ್ಯಕ್ತಪಡಿಸಿ ಕಾರ್ಖಾನೆಯನ್ನು ಓ ಅಂಡ್ ಎಂ ಆಧಾರದ ಮೇಲೆ ನಡೆಸಲು ಮನವಿಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.<br>ಈ ಹಿನ್ನೆಲೆಯಲ್ಲಿ, ಮೈಸೂರು ಸಕ್ಕರೆ ಕಾರ್ಖಾನೆಯನ್ನು LROT (Lease Rehabilitate Operate Transfer) ಆಧಾರದ ಮೇಲೆ ಖಾಸಗಿಯವರಿಗೆ ಗುತ್ತಿಗೆ ನೀಡುವುದರ ಮೂಲಕ ಪುನಶ್ಚೇತನಗೊಳಿಸಲು ತೀರ್ಮಾನಿಸಿರುವುದರ ಕುರಿತು ಸರ್ಕಾರದ ಹಂತದಲ್ಲಿ ಪುನರ್ ಪರಿಶೀಲಿಸಲಾಗುತ್ತಿದೆ. |

......2

| | | |
|---|---|---|
| (ಈ) | ಸ್ವಯಂ ನಿವೃತ್ತಿ ಪಡೆಯದೆ ಉಳಿದಿರುವ ನೌಕರರಿಗೆ ವಿವಿಧ ನಿಗಮ/ಮಂಡಳಿಗಳಿಗೆ ನೇಮಕಾತಿ ಮಾಡಲು ಸರ್ಕಾರ ಮುಂದಾಗದಿರಲು ಕಾರಣವೇನು; ಭದ್ರಾವತಿಯ ಮೈಸೂರು ಪೇಪರ್ ಮಿಲ್ ಕಾರ್ಮಿಕರ ಮಾದರಿಯಲ್ಲಿ ಈ ನೌಕರರನ್ನು ಸಹ ಇತರೆ ನಿಗಮಗಳಲ್ಲಿ ವಿಲೀನ ಮಾಡದಿರಲು ಕಾರಣವೇನು? (ವಿವರ ನೀಡುವುದು) | ಮೈಸೂರು ಸಕ್ಕರೆ ಕಂಪನಿಯಲ್ಲಿ ಸ್ವಯಂ ನಿವೃತ್ತಿ ಯೋಜನೆಯನ್ನು ಅನುಷ್ಠಾನಗೊಳಿಸುವುದಕ್ಕಾಗಿ ಸರ್ಕಾರದ ಆದೇಶ ಸಂಖ್ಯೆ: ಸಿಐ 05 ಸಿಓಎಫ್ 2020, ದಿನಾಂಕ: 15.06.2020ರಲ್ಲಿ ರೂ.21.80 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿತ್ತು. ಅದರಂತೆ ಸ್ವಯಂ ನಿವೃತ್ತಿಗೆ ಸಹಮತ ವ್ಯಕ್ತಪಡಿಸಿದ ಒಟ್ಟಾರೆ 222 ನೌಕರರನ್ನು ಕಂಪನಿಯ ಸೇವೆಯಿಂದ ಬಿಡುಗಡೆಗೊಳಿಸಲಾಗಿದೆ. ಪ್ರಸ್ತುತ 39 ನೌಕರರು ಕಂಪನಿಯ ಸೇವೆಯಲ್ಲಿ ಇರುತ್ತಾರೆ.<br>ಭದ್ರಾವತಿಯ ಮೈಸೂರು ಕಾಗದ ಕಾರ್ಖಾನೆ (ಎಂ.ಪಿ.ಎಂ)ಯಲ್ಲಿ ಪ್ರಸ್ತುತ ಸ್ವಯಂ ನಿವೃತ್ತಿ ಪಡೆಯದ 209 ಖಾಯಂ ಕಾರ್ಮಿಕರು ಮತ್ತು ಅಧಿಕಾರಿಗಳು ಕಂಪನಿಯ ಮಸ್ಟರ್ ರೋಲ್‌ನಲ್ಲಿದ್ದು, 129 ಖಾಯಂ ಉದ್ಯೋಗಿಗಳು (ಕಾರ್ಮಿಕರು ಮತ್ತು ಅಧಿಕಾರಿಗಳು) ನಿಯೋಜನೆಯಡಿಯಲ್ಲಿ ಸರ್ಕಾರದ ವಿವಿಧ ನಿಗಮ, ಮಂಡಳಿಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಉಳಿದ ಖಾಯಂ ಉದ್ಯೋಗಿಗಳು ಕಾರ್ಖಾನೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ ಹಾಗೂ ನಿಯೋಜನೆ ಮೇಲೆ ತೆರಳಿರುವ ಯಾವುದೇ ಉದ್ಯೋಗಿಯನ್ನು ಸಂಬಂಧಪಟ್ಟ ನಿಗಮ/ಮಂಡಳಿಗಳು ವಿಲೀನಗೊಳಿಸಿರುವುದಿಲ್ಲ.<br>ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಸಾರ್ವಜನಿಕ ವಲಯದ ಸಂಸ್ಥೆಗಳ ನೌಕರರ ಸೇವೆಗಳನ್ನು ಸಾರ್ವಜನಿಕ ಸೇವೆಗೆ ವಿಲೀನಗೊಳಿಸುವುದಕ್ಕೆ ನಿಷೇಧ) ಅಧಿನಿಯಮ 2020ರ ಕಲಂ (3) ರಲ್ಲಿ ಅಧಿನಿಯಮಿಸಿರುವಂತೆ, ಮೈಸೂರು ಸಕ್ಕರೆ ಕಂಪನಿಯ ನೌಕರರನ್ನು ರಾಜ್ಯ ಸರ್ಕಾರದ ಇಲಾಖೆಗಳಲ್ಲಿ ವಿಲೀನಗೊಳಿಸಲು ಅವಕಾಶವಿರುವುದಿಲ್ಲ. |

ಸಂಖ್ಯೆ: ಸಿಐ 276 ಸಿಓಎಫ್ 2021

(ಶಂಕರ್.ಬ.ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು.